

# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ರಹಿತ ಪ್ರಶ್ನೆ

ದಿನಾಂಕ : 29-03-2021 ಪ್ರಶ್ನೆ ಸಂಖ್ಯೆ : 1981 (2400)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀಮತಿ ಭಾರತಿ ಶೆಟ್ಟಿ (ನಾಮನಿರ್ದೇಶನ ಹೊಂದಿದವರು)

ಉತ್ತರ ನೀಡಬೇಕಾದ ದಿನಾಂಕ : 29-03-2021

ಉತ್ತರಿಸುವ ಸಚಿವರು: ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

ವಿಷಯ : ವೈದ್ಯಕೀಯ ವಿದ್ಯಾರ್ಥಿಗಳ ಉತ್ತರ ಪತ್ರಿಕೆಗಳ ಮೌಲ್ಯಮಾಪನ ಬಗ್ಗೆ

(ಅ) ವೈದ್ಯಕೀಯ ವಿದ್ಯಾರ್ಥಿಗಳು ಪರೀಕ್ಷೆಯಲ್ಲಿ ಬರೆದ ಉತ್ತರ ಪತ್ರಿಕೆಗಳನ್ನು ಯಾವ ರೀತಿಯಲ್ಲಿ ಮೌಲ್ಯಮಾಪನ ಮಾಡಲಾಗುತ್ತಿದೆ;

(ಆ) ಸದರಿ ವ್ಯವಸ್ಥೆಯು ಹಿಂದಿನ ವ್ಯವಸ್ಥೆಗಿಂತ ಯಾವ ರೀತಿಯ ಗುಣಮಟ್ಟದಲ್ಲಿ ಸುಧಾರಣೆ ಕಂಡಿದೆ; ಅಥವಾ ಕಳಪೆಯಾಗಿದೆ; ಇದನ್ನು ಸುಧಾರಿಸಲು ತೆಗೆದುಕೊಂಡ ಕ್ರಮಗಳೇನು ;

(ಇ) ಸಾಮಾನ್ಯವಾಗಿ ಒಂದು ಉತ್ತರ ಪತ್ರಿಕೆ ಮೌಲ್ಯ ಮಾಪನಕ್ಕೆ ಉತ್ತಮವಾದ ಪರೀಕ್ಷಕರು ಎಷ್ಟು ಸಮಯ ತೆಗೆದುಕೊಳ್ಳುತ್ತಿದ್ದಾರೆ; ಇದನ್ನು ವಿಶ್ವವಿದ್ಯಾನಿಲಯವು ಯಾವ ರೀತಿ ದೃಢೀಕರಿಸಿಕೊಳ್ಳುತ್ತಿದೆ;

(ಈ) ವಿಶ್ವವಿದ್ಯಾಲಯವು ಗುರುತಿಸಿದ ಮೌಲ್ಯಮಾಪಕರೇ ಉತ್ತರ ಪತ್ರಿಕೆಗಳನ್ನು ಮೌಲ್ಯಮಾಪನ ಮಾಡುತ್ತಿರುವ ಬಗ್ಗೆ ಮಾಹಿತಿ ಹೊಂದಲು ಯಾವ ವ್ಯವಸ್ಥೆ ಹೊಂದಿದೆ ;

(ಉ) 3 ರಿಂದ 5 ನಿಮಿಷಗಳಲ್ಲಿ ಉತ್ತರ ಪತ್ರಿಕೆಗಳ ಮೌಲ್ಯಮಾಪನವಾಗುತ್ತಿದೆ ಎಂಬ ವಿದ್ಯಾರ್ಥಿಗಳ ಅಳಲನ್ನು ವಿಶ್ವವಿದ್ಯಾನಿಲಯ ಯಾವ ರೀತಿ ದೂರ ಮಾಡುತ್ತದೆ ?